## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 347

ಸದಸ್ಯರ ಹೆಸರು : ಶ್ರೀ ಸಿ.ಎನ್. ಮಂಜೇಗೌಡ

ಉತ್ತರಿಸುವ ಸಚಿವರು : ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು

ಉತ್ತರಿಸುವ ದಿನಾಂಕ : 18.02.2022.

<table>
<tr><th>ಕ್ರ. ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ.</td><td>ರಾಜ್ಯದ ನಾಲ್ಕು ಸಾರಿಗೆ ನಿಗಮಗಳಿಂದ ಒಟ್ಟು ಇರುವ ಅಧಿಕಾರಿ/ನೌಕರರ ಸಂಖ್ಯೆ ಎಷ್ಟು; ಎಲ್ಲಾ ವೃಂದದ ಹುದ್ದೆಗಳು ಸೇರಿದಂತೆ ಪ್ರತ್ಯೇಕ ನಿಗಮವಾರು ಮಾಹಿತಿ ನೀಡುವುದು:</td><td>ರಾಜ್ಯದ ನಾಲ್ಕು ಸಾರಿಗೆ ನಿಗಮಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿ/ನೌಕರರ ವಿವರ ಈ ಕೆಳಕಂಡಂತಿದೆ:
<table>
<tr><th>ನಿಗಮ</th><th>ವೃಂದ-ಎ</th><th>ವೃಂದ-ಬಿ</th><th>ವೃಂದ-ಸಿ</th><th>ವೃಂದ-ಡಿ</th><th>ಕಾರ್ಯನಿರ್ವಹಿಸುತ್ತಿರುವ ಹುದ್ದೆಗಳ ಸಂಖ್ಯೆ</th></tr>
<tr><td>ಕ.ರಾ.ರ.ಸಾ.ನಿಗಮ</td><td>145</td><td>193</td><td>35239</td><td>556</td><td>36133</td></tr>
<tr><td>ಬೆಂ.ಮ.ಸಾ.ಸಂಸ್ಥೆ</td><td>74</td><td>61</td><td>29642</td><td>80</td><td>29857</td></tr>
<tr><td>ವಾ.ಕ.ರ.ಸಾ.ಸಂಸ್ಥೆ</td><td>73</td><td>96</td><td>21463</td><td>324</td><td>21956</td></tr>
<tr><td>ಕ.ಕ.ರ.ಸಾ.ನಿಗಮ</td><td>71</td><td>78</td><td>18923</td><td>306</td><td>19378</td></tr>
<tr><td>ಒಟ್ಟು</td><td>363</td><td>428</td><td>105267</td><td>1266</td><td>107324</td></tr>
</table></td></tr>
<tr><td>ಆ.</td><td>ಈ ಅಧಿಕಾರಿ /ನೌಕರರಲ್ಲಿ ಎಷ್ಟು ಜನ ಅರ್ಹರಿಗೆ ಸಮವಸ್ತ್ರ ನೀಡುವ ಪದ್ಧತಿ ಚಾಲನೆಯಲ್ಲಿದೆ; ಈ ಸಮವಸ್ತ್ರಗಳಿಗೆ ವಾರ್ಷಿಕವಾಗಿ ತಗಲುವ ವೆಚ್ಚವೆಷ್ಟು: (ವಿವರ ನೀಡುವುದು)</td><td>ರಾಜ್ಯದ ನಾಲ್ಕೂ ಸಾರಿಗೆ ನಿಗಮಗಳಲ್ಲಿ ಅರ್ಹ ಚಾಲಕ, ನಿರ್ವಾಹಕ, ಚಾಲಕ-ಕಂ-ನಿರ್ವಾಹಕ, ಸಂಚಾರ ನಿಯಂತ್ರಕ, ಸಹಾಯಕ ಸಂಚಾರ ನಿರೀಕ್ಷಕ, ಸಂಚಾರ ನಿರೀಕ್ಷಕ, ಸಹಾಯಕ ಸಂಚಾರ ಅಧೀಕ್ಷಕ, ತಾಂತ್ರಿಕ ಸಹಾಯಕ, ಸಹಾಯಕ ಕುಶಲಕರ್ಮಿ, ಕುಶಲಕರ್ಮಿ, ಮುಖ್ಯ ಕುಶಲಕರ್ಮಿ, ಪಾರುಪತ್ತೆಗಾರರು, ಸಹಾಯಕ ಕಾರ್ಯ ಅಧೀಕ್ಷಕ, ಕ.ರಾ.ಸಾ.ಪೇದೆ, ಕರಾಸಾ ಹವಾಲ್ದಾರ, ಸಹಾಯಕ ಭದ್ರತಾ ನಿರೀಕ್ಷಕ, ವಿಭಾಗೀಯ ಭದ್ರತಾ ನಿರೀಕ್ಷಕ, ವಿಭಾಗೀಯ ಭದ್ರತಾ ಅಧೀಕ್ಷಕ, ಸಹಾಯಕ ಭದ್ರತಾ ಮತ್ತು ಜಾಗೃತಾಧಿಕಾರಿ, ಭದ್ರತಾ ಮತ್ತು ಜಾಗೃತಾಧಿಕಾರಿ, ಉಪಮುಖ್ಯ ಭದ್ರತಾ ಮತ್ತು ಜಾಗೃತಾಧಿಕಾರಿ, ಮುಖ್ಯ ಭದ್ರತಾ ಮತ್ತು ಜಾಗೃತಾಧಿಕಾರಿ ಮತ್ತು ಕಛೇರಿ</td></tr>
</table>

| | | |
|---|---|---|
| | | ಸಹಾಯಕರು ಇವರುಗಳಿಗೆ ಸಮವಸ್ತ್ರ ನೀಡಲಾಗುತ್ತಿದ್ದು, ವಿವರ ಈ ಕೆಳಕಂಡಂತಿದೆ: **(ರೂ. ಲಕ್ಷಗಳಲ್ಲಿ)** |

| ನಿಗಮ | ಸಮವಸ್ತ್ರ ಪಡೆಯಲು ಅರ್ಹ ಅಧಿಕಾರಿ/ ನೌಕರರ ಸಂಖ್ಯೆ | ವಾರ್ಷಿಕವಾಗಿ ತಗಲುವ ವೆಚ್ಚ |
|---|---|---|
| ಕ.ರಾ.ರ.ಸಾ.ನಿಗಮ | 33715 | 288.00 |
| ಬೆಂ.ಮ.ಸಾ.ಸಂಸ್ಥೆ | 28665 | 380.00 |
| ವಾ.ಕ.ರ.ಸಾ.ಸಂಸ್ಥೆ | 20379 | 210.00 |
| ಕ.ಕ.ರ.ಸಾ.ನಿಗಮ | 18618 | 147.84 |
| ಒಟ್ಟು | 101377 | 1025.84 |

| | | |
|---|---|---|
| ಇ. | ಕಳೆದ ಮೂರು ವರ್ಷಗಳಿಂದ ಅರ್ಹ ಅಧಿಕಾರಿ /ನೌಕರರಿಗೆ ಸಮವಸ್ತ್ರ ವಿತರಣೆ ಮಾಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು: (ಸ್ಪಷ್ಟವಾದ ವಿವರ ನೀಡುವುದು) | ನಾಲ್ಕೂ ಸಾರಿಗೆ ಸಂಸ್ಥೆಗಳಲ್ಲಿ ಕಳೆದ 3 ವರ್ಷಗಳಿಂದ ಸಮವಸ್ತ್ರ ವಿತರಣೆಗೆ ಸಂಬಂಧಿಸಿದಂತೆ ಕೈಗೊಂಡ ಕ್ರಮಗಳ ವಿವರ ಕೆಳಕಂಡಂತಿದೆ.<br>• ಈ ಹಿಂದೆ ಸಮವಸ್ತ್ರಗಳ ಖರೀದಿಗೆ ಕರೆಯಲಾದ ಎರಡು ಟೆಂಡರ್‌ಗಳನ್ನು ತಾಂತ್ರಿಕ ಕಾರಣಗಳಿಂದ ರದ್ದುಗಳಿಸಲಾಗಿತ್ತು. ಆದ್ದರಿಂದ 2017-18ನೇ ಸಾಲಿನಲ್ಲಿ ವಿತರಿಸಬೇಕಾದ ಸಮವಸ್ತ್ರಗಳನ್ನು ಟೆಂಡರ್ ಮುಖಾಂತರ ಆಗಸ್ಟ್-2020 ರಿಂದ ಮಾರ್ಚ್-2021ರವರೆಗೆ ಖರೀದಿಸಿ ಸಿಬ್ಬಂದಿಗಳಿಗೆ ವಿತರಿಸಲಾಗಿದೆ. ಕೋವಿಡ್-19ರ ಕಾರಣದಿಂದಾಗಿ ಸರಬರಾಜು ವಿಳಂಬವಾಗಿರುತ್ತದೆ.<br>• 2018-19ನೇ ಸಾಲಿಗೆ ಸಮವಸ್ತ್ರದ ಬದಲಾಗಿ ನಗದನ್ನು ಪಾವತಿಸಲಾಗಿದೆ.<br>• 2019-20 ಮತ್ತು 2020-21ನೇ ಸಾಲಿಗೆ ಸಮವಸ್ತ್ರದ ಬದಲಾಗಿ ನಗದನ್ನು ಪಾವತಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.<br>• 2021-22ನೇ ಸಾಲಿನ ಸಮವಸ್ತ್ರಗಳ ಖರೀದಿಗೆ ಮೆ\|\| ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮ, ಬೆಂಗಳೂರು ಇವರಿಗೆ ಖರೀದಿ ಆದೇಶ ನೀಡಲಾಗಿದೆ. |
| ಈ. | ಕಳೆದ ಮೂರು ವರ್ಷಗಳಿಂದ ನಿವೃತ್ತಿ ಹೊಂದಿದ ನಂತರ ಅಧಿಕಾರಿ/ ನೌಕರರಿಗೆ ನಿಗಮಗಳಿಂದ ಬರಬೇಕಾಗಿರುವ ಪಿಂಚಣಿ, ಪಿ.ಎಫ್, ಇತರೆ ಭತ್ಯೆಗಳನ್ನು ಪಾವತಿ ಮಾಡದಿರುವುದು ಸರ್ಕಾರದ ಗಮನಕ್ಕೆ | **ಕ.ರಾ.ರ.ಸಾ.ನಿಗಮ**<br>ಕರಾರಸಾ ನಿಗಮದಲ್ಲಿ ಕಳೆದ 3 ವರ್ಷಗಳಲ್ಲಿ ನಿವೃತ್ತಿ ಹೊಂದಿದ ಅಧಿಕಾರಿ/ನೌಕರರಿಗೆ ಪಾವತಿಸಬೇಕಾದ ಭವಿಷ್ಯ ನಿಧಿ ಮೊತ್ತ ಬಾಕಿ ಯಾವುದೂ ಇರುವುದಿಲ್ಲ.<br>ಮಾಸಿಕ ಪಿಂಚಣಿಯು ಪ್ರಾದೇಶಿಕ ಭವಿಷ್ಯ ನಿಧಿ ಆಯುಕ್ತರು ಇವರ ಕಛೇರಿಯಿಂದ ಪಾವತಿಯಾಗುತ್ತಿದ್ದು ನಿಗಮದ ವ್ಯಾಪ್ತಿಗೆ ಬರುವುದಿಲ್ಲ.<br>ನಿವೃತ್ತ ನೌಕರರಿಗೆ ಪಾವತಿ ಮಾಡಬೇಕಾಗಿರುವ ಉಪದಾನ ಹಾಗೂ ರಜೆ ನಗದೀಕರಣ ಮೊತ್ತವನ್ನು ಏಪ್ರಿಲ್-2021ರ ಮಾಹೆಯವರೆಗೆ ನಿವೃತ್ತರಾದ ಎಲ್ಲಾ ನೌಕರರಿಗೆ ಪಾವತಿ ಮಾಡಲಾಗಿದ್ದು, ಮೇ-2021 ರ ನಂತರ ನಿವೃತ್ತರಾದವರಿಗೆ ಪಾವತಿ ಮಾಡುವುದು ಬಾಕಿ ಇರುತ್ತದೆ. |

| | | |
|---|---|---|
| | ಬಂದಿದೆಯೇ; | **ಬೆಂ.ಮ.ಸಾ.ಸಂಸ್ಥೆ**<br>• ಪಿಂಚಣಿ ಅರ್ಜಿಗಳು ಪ್ರಾದೇಶಿಕ ಭವಿಷ್ಯನಿಧಿ ಕಛೇರಿಯಿಂದ ಇತ್ಯರ್ಥಗೊಳ್ಳುತ್ತಿದೆ ಹಾಗೂ ಸಂಬಂಧಿಸಿದ ಎಲ್ಲಾ ಅರ್ಹ ಅರ್ಜಿಗಳನ್ನು ಇತ್ಯರ್ಥಕ್ಕಾಗಿ ಪ್ರಾದೇಶಿಕ ಭವಿಷ್ಯನಿಧಿ ಕಛೇರಿಗೆ ಸಲ್ಲಿಸಲಾಗುತ್ತಿದೆ.<br>• ಪಿ.ಎಫ್. ಪಾವತಿಗಾಗಿ ಅರ್ಜಿ ಸಲ್ಲಿಸಿರುವ ಎಲ್ಲಾ ಅಧಿಕಾರಿ/ನೌಕರರಿಗೆ ಪಿ.ಎಫ್. ನಿಯಮಾನುಸಾರ ಅರ್ಹ ಮೊತ್ತವನ್ನು ಈವರೆಗೂ ಪಾವತಿಸಿದ್ದು, ಯಾವುದೇ ಬಾಕಿ ಇರುವುದಿಲ್ಲ.<br>• ನಿವೃತ್ತ ನೌಕರರಿಗೆ ಸಪ್ಟೆಂಬರ್-2021 ರವರೆಗೆ ಉಪಧನ ಹಾಗೂ ಮಾರ್ಚ್-2021 ರವರೆಗೆ ಗಳಿಕೆ ರಜೆ ನಗದೀಕರಣ ಮೊತ್ತ ಪಾವತಿಗೆ ಕ್ರಮ ಕೈಗೊಳ್ಳಲಾಗಿದೆ.<br><br>**ವಾ.ಕ.ರ.ಸಾ.ಸಂಸ್ಥೆ**<br>ವಾ.ಕ.ರ.ಸಾ.ಸಂಸ್ಥೆಯಿಂದ ಕಳೆದ 3 ವರ್ಷಗಳಲ್ಲಿ ನಿವೃತ್ತಿ ಹೊಂದಿದ ಅಧಿಕಾರಿ/ನೌಕರರಿಗೆ ಪಾವತಿಸಬೇಕಾದ ಭವಿಷ್ಯ ನಿಧಿ ಮೊತ್ತ ಬಾಕಿ ಇರುವುದಿಲ್ಲ. ಮಾಸಿಕ ಪಿಂಚಣಿ ಪಾವತಿಯು ನಿಗಮದ ವ್ಯಾಪ್ತಿಯಲ್ಲಿ ಬರುವುದಿಲ್ಲ. ಆದರೆ ನಿವೃತ್ತ ನೌಕರರ ಉಪಧನ ಹಾಗೂ ರಜೆ ನಗದೀಕರಣ ಮೊತ್ತವನ್ನು ಡಿಸೆಂಬರ್-2019 ರಿಂದ ಪಾವತಿ ಮಾಡಿರುವುದಿಲ್ಲ.<br><br>**ಕ.ಕ.ರ.ಸಾ.ನಿಗಮ**<br>ನಿಗಮದ ಅಧಿಕಾರಿ/ನೌಕರರಿಗೆ ಬರಬೇಕಾಗಿರುವ ಪಿಂಚಣಿಯನ್ನು ಭವಿಷ್ಯ ನಿಧಿ ಆಯುಕ್ತರ ಕಛೇರಿಯವರ ಮುಖಾಂತರ ಇತ್ಯರ್ಥ ಪಡಿಸಲಾಗುತ್ತಿದ್ದು, ಬಾಕಿ ಪ್ರಕರಣಗಳು ಸದರಿ ಕಛೇರಿ ವ್ಯಾಪ್ತಿಗೆ ಒಳಪಡುತ್ತವೆ. ಭವಿಷ್ಯ ನಿಧಿಗೆ ಸಂಬಂಧಿಸಿದಂತೆ ಒಟ್ಟು 24 ಅಭ್ಯರ್ಥನಗಳು ಹಾಗೂ ಅವುಗಳ ಮೊತ್ತ ರೂ.135.00 ಲಕ್ಷಗಳು ಬಾಕಿ ಉಳಿದಿದ್ದು, ಅದನ್ನು ಇತ್ಯರ್ಥ ಪಡಿಸುವ ಕ್ರಮ ಪ್ರಗತಿಯಲ್ಲಿದೆ. |
| ಉ. | ಬಂದಿದ್ದಲ್ಲಿ, ಇಲ್ಲಿಯವರೆಗೆ ಪಾವತಿ ಮಾಡದಿರಲು ಕಾರಣವೇನು : ಪಾವತಿ ಮಾಡಲು ಬಾಕಿ ಇರುವ ಮೊತ್ತವೆಷ್ಟು: ಇದನ್ನು ಎಷ್ಟು ದಿವಸದೊಳಗಾಗಿ ಪಾವತಿ ಮಾಡಲಾಗುವುದು: (ವಿವರ ನೀಡುವುದು) | **ಕ.ರಾ.ರ.ಸಾ.ನಿಗಮ**<br>ನಿಗಮವು ಕೋವಿಡ್-19ರಿಂದ ಉಂಟಾದ ಆರ್ಥಿಕ ಸಂಕಷ್ಟದಲ್ಲಿರುವ ಕಾರಣ ಮೇ-2021 ರ ನಂತರ ನಿವೃತ್ತರಾದ ಅಧಿಕಾರಿ/ಸಿಬ್ಬಂದಿಗಳಿಗೆ ಉಪಧನದ ಬಾಬ್ತು ರೂ.58.34 ಕೋಟಿ ಹಾಗೂ ಗಳಿಕೆ ರಜೆ ನಗದೀಕರಣ ಬಾಬ್ತು ರೂ.5.98 ಕೋಟಿ ಬಾಕಿ ಇರುತ್ತದೆ. ಸದರಿ ಬಾಕಿ ಮೊಬಲಗನ್ನು ನಿಗಮದ ಆಂತರಿಕ ಸಂಪನ್ಮೂಲ ಕ್ರೋಢಿಕರಣದಲ್ಲಿ ಸುಧಾರಣೆಗೊಂಡಂತೆ ಆದ್ಯತೆಯ ಮೇಲೆ ಹಂತ ಹಂತವಾಗಿ ಪಾವತಿಸಲಾಗುವುದು. |

--4

ಬೆಂ.ಮ.ಸಾ.ಸಂಸ್ಥೆ

ಕೋವಿಡ್-19 ನಿಂದಾಗಿ ಸಾರಿಗೆ ಆದಾಯವು ಕುಂಠಿತಗೊಂಡಿದ್ದು, ಸಂಸ್ಥೆಯು ನಗದು ಕೊರತೆಯನ್ನು ಅನುಭವಿಸುತ್ತಿದೆ. ಈ ಹಿನ್ನೆಲೆಯಲ್ಲಿ ನಿವೃತ್ತ ನೌಕರರಿಗೆ ಉಪಧನ ಹಾಗೂ ಗಳಿಕೆ ರಜೆ ನಗದೀಕರಣ ಭತ್ಯೆಗಳನ್ನು ಪಾವತಿಸಲು ಸಾಧ್ಯವಾಗಿರುವುದಿಲ್ಲ.

ಮುಂದುವರೆದು ನಿವೃತ್ತ ನೌಕರರಿಗೆ ಅಕ್ಟೋಬರ್-2021 ರಿಂದ ಜನವರಿ-22 ರವರೆಗೆ ಅಂದಾಜು ರೂ.13.02 ಕೋಟಿ ಉಪಧನ ಹಾಗೂ ಏಪ್ರಿಲ್-2021 ರಿಂದ ಜನವರಿ-2022 ರವರೆಗೆ ಅಂದಾಜು ರೂ.2.95 ಕೋಟಿ ಗಳಿಕೆ ರಜೆ ನಗದೀಕರಣ ಮೊತ್ತ ಪಾವತಿ ಬಾಕಿ ಇದ್ದು, ಮುಂದಿನ ದಿನಗಳಲ್ಲಿ ಸಂಸ್ಥೆಯ ಹಣಕಾಸಿನ ಲಭ್ಯತೆ ಹಾಗೂ ಜೇಷ್ಠತೆ ಅನುಸಾರ ಬಾಕಿ ಮೊತ್ತದ ಪಾವತಿಗೆ ಕ್ರಮ ಕೈಗೊಳ್ಳಲಾಗುವುದು.

ವಾ.ಕ.ರ.ಸಾ.ಸಂಸ್ಥೆ

ಡಿಸೆಂಬರ್-2019 ರಿಂದ ಡಿಸೆಂಬರ್-2021 ರವರೆಗೆ ನಿವೃತ್ತಿ ಹೊಂದಿದ ಅಧಿಕಾರಿ/ನೌಕರರಿಗೆ ವಾಕರಸಾಸಂಸ್ಥೆಯಿಂದ ಉಪದಾನ, ರಜೆ ನಗದೀಕರಣ, 2016ರ ವೇತನ ಪರಿಷ್ಕರಣೆ ಹಿಂಬಾಕಿ ಮೊತ್ತ, ತುಟ್ಟಿ ಭತ್ಯೆ ಹಿಂಬಾಕಿ ಮೊತ್ತ ಹೀಗೆ ಒಟ್ಟು ರೂ.226.70 ಕೋಟಿ ಪಾವತಿ ಮಾಡುವುದು ಬಾಕಿ ಇರುತ್ತದೆ. ಸಂಸ್ಥೆಯು ಕಳೆದ ಹಲವಾರು ವರ್ಷಗಳಿಂದ ಸತತ ನಷ್ಟವನ್ನು ಅನುಭವಿಸುತ್ತಿದ್ದು, 2020-21 ಕ್ಕೆ ಸಂಚಿತ ನಷ್ಟ ರೂ. (-)1457.07 ಕೋಟಿ ಹೊಂದಿದ್ದು, ಇದು ಸಂಸ್ಥೆಯ ಆರ್ಥಿಕ ಪರಿಸ್ಥಿತಿಯ ಮೇಲೆ ವ್ಯತಿರಿಕ್ತ ಪರಿಣಾಮ ಉಂಟು ಮಾಡಿರುತ್ತದೆ. ಸಂಸ್ಥೆಯು 2021-22 ನೇ ಸಾಲಿನಲ್ಲಿ ಪ್ರತಿ ದಿನದ ಸರಾಸರಿ ಆದಾಯವು ರೂ.273.66 ಲಕ್ಷ ಇದ್ದು, ಪ್ರತಿದಿನದ ಸರಾಸರಿ ವೆಚ್ಚವು ರೂ.491.86 ಲಕ್ಷ ಇದ್ದು, ಸಂಸ್ಥೆಯು ಪ್ರಸ್ತುತ ಗಳಿಸುತ್ತಿರುವ ಆದಾಯವು ವೆಚ್ಚಕ್ಕಿಂತ ಕಡಿಮೆಯಾಗಿರುವುದರಿಂದ ನಿಧಿ ಕೊರತೆಯಿಂದ ವೇತನ, ಇಂಧನ ಹಾಗೂ ಇತರೇ ಅತ್ಯಗತ್ಯ ವೆಚ್ಚಗಳನ್ನು ಮಾತ್ರ ಪಾವತಿಸುತ್ತಿದ್ದು, ಪ್ರಸ್ತುತ ರೂ.100.00 ಕೋಟಿ ಸಾಲ ಪಡೆದು ನಿವೃತ್ತ

--5

| | | |
|---|---|---|
| | | ನೌಕರರಿಗೆ ಉಪದಾನ ಪಾವತಿಸಲು ಹಾಗೂ ರೂ.200.00 **ಕೋಟಿ ಸಾಲ** ಪಡೆದು ಭ.ನಿ ಬಾಕಿ ಮೊತ್ತವನ್ನು ಪಾವತಿಸುವ ಕ್ರಮ ಪ್ರಗತಿಯಲ್ಲಿರುತ್ತದೆ. ಮುಂಬರುವ ದಿನಗಳಲ್ಲಿ ಸಂಸ್ಥೆಯ ಆರ್ಥಿಕ ಪರಿಸ್ಥಿತಿಗನುಗುಣವಾಗಿ ಬಾಕಿ ಮೊತ್ತ ಪಾವತಿಸಲು ಕ್ರಮಕೈಗೊಳ್ಳಲಾಗುವುದು.<br><br>**ಕ.ಕ.ರ.ಸಾ.ನಿಗಮ**<br><br>24 ಪ್ರಕರಣಗಳು ವರ್ಗಾವಣೆಯಾಗಿ ಬಂದಿರುವುದರಿಂದ ಭವಿಷ್ಯ ನಿಧಿ ವಿವರಣಾ ಮಾಹಿತಿ ಕೊರತೆಯಿಂದಾಗಿ ಇತ್ಯರ್ಥಪಡಿಸಲು ವಿಳಂಬವಾಗಿರುತ್ತದೆ ಹಾಗೂ ಸದರಿ ಪ್ರಕರಣಗಳನ್ನು ಇತ್ಯರ್ಥ ಪಡಿಸುವ ಕ್ರಮ ಪ್ರಗತಿಯಲ್ಲಿರುತ್ತದ್ದು, ರೂ.135.00 ಲಕ್ಷಗಳ ಮೊತ್ತ ಪಾವತಿಸುವುದು ಬಾಕಿ ಇರುತ್ತದೆ. |
| ಊ. | ಸರ್ಕಾರ ಈ 4 ನಿಗಮದ ಅಧಿಕಾರಿ/ ನೌಕರರಿಗೆ ಮಾಹೆಯಾನ ವೇತನಕ್ಕಾಗಿ ಮತ್ತು ಹಿಂದಿನ ಬಾಕಿ ವೇತನಕ್ಕಾಗಿ ಇಲ್ಲಿಯ ತನಕ ನೀಡಿರುವ ಒಟ್ಟು ಮೊತ್ತವೇಷ್ಟು? (ನಿಗಮವಾರು ಮಾಹಿತಿ ಒದಗಿಸುವುದು) | ರಾಜ್ಯದ ನಾಲ್ಕೂ ಸಾರಿಗೆ ಸಂಸ್ಥೆಗಳಿಗೆ ಸರ್ಕಾರವು ನಿಗಮಗಳ ಅಧಿಕಾರಿ/ ನೌಕರರಿಗೆ ವೇತನಕ್ಕಾಗಿ ಬಿಡುಗಡೆ ಮಾಡಲಾದ ಅನುದಾನದ ವಿವರ ಈ ಕೆಳಕಂಡಂತಿದೆ:<br>(ರೂ. ಲಕ್ಷಗಳಲ್ಲಿ)<br>ನಿಗಮ \| 2020-21 \| 2021-22<br>ಕ.ರಾ.ರ.ಸಾ.ನಿಗಮ \| 56355.00 \| 23586.00<br>ಬೆಂ.ಮ.ಸಾ.ಸಂಸ್ಥೆ \| 69055.00 \| 43005.00<br>ವಾ.ಕ.ರ.ಸಾ.ಸಂಸ್ಥೆ \| 36941.00 \| 20804.00<br>ಕ.ಕ.ರ.ಸಾ.ನಿಗಮ \| 32989.00 \| 13414.00<br>ಒಟ್ಟು \| **195340.00** \| **100809.00** |

ಸಂಖ್ಯೆ: ಟಿಡಿ 26 ಟಿಸಿಕ್ಯೂ 2022

(ಬಿ.ಶ್ರೀರಾಮುಲು)
ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ
ಕಲ್ಯಾಣ ಸಚಿವರು